ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

## ನೂರ ಮೂವತ್ತೆಂಟನೆಯ ಅಧಿವೇಶನ

## ಸೋಮವಾರ, ದಿನಾಂಕ : 22ನೇ ಜುಲೈ, 2019

ಅನಧಿಕೃತ ದಲ್ಲಾಳಿಗಳ ಬಗ್ಗೆ

ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು):-

451 (580) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರೈತಾಪಿ ವರ್ಗದವರು ಬೆಳೆದ ಭತ್ತ ಹಾಗೂ ದ್ವಿದಳ ಧಾನ್ಯಗಳನ್ನು ಅನಧಿಕೃತ ದಲ್ಲಾಳಿಗಳು ಕಡಿಮೆ ದರದಲ್ಲಿ ಮತ್ತು ತೂಕದಲ್ಲಿ ಮೋಸ ಮಾಡಿ ಖರೀದಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ಅನಧಿಕೃತ ದಲ್ಲಾಳಿಗಳನ್ನು ನಿಯಂತ್ರಿಸಲು ಸರ್ಕಾರವು ಕೈಗೊಂಡಿರುವ ಕಾನೂನು ರೀತಿಯ ಕ್ರಮಗಳೇನು; (ವಿವರ ನೀಡುವುದು)

(ಇ) ಇಲ್ಲಿಯವರೆಗೆ ಅನಧಿಕೃತ ದಲ್ಲಾಳಿಗಳ ಮೇಲೆ ದಾಖಲಿಸಿರುವ ಪ್ರಕರಣಗಳ ವಿವರ ಒದಗಿಸುವುದು ಮತ್ತು ಪ್ರಕರಣಗಳಿಗೆ ಸಂಬಂಧಿಸಿದಂತೆ ಕಾನೂನಾತ್ಮಕ ಕ್ರಮ ಕೈಗೊಂಡಿರುವ ಬಗ್ಗೆ ವಿವರ ಒದಗಿಸುವುದು ?